# ಕವಿತಾಕಲಾಪ.

ವಿ. ವೆ. ತೊರ್ಕೆ.

(ಚಂದಿರಾನಂದ)

# ಒಪ್ಪೋಲೆ.

| ಪುಟ. | ಪದ. | ಚರಣ. | ತಪ್ಪು. | ಒಪ್ಪು. |
|---|---|---|---|---|
| ೨ | ೨ | ೬ | ಬೇಗದಿಂ | ಬೇಗದಿಂದ |
| ೭ | ೭ | ೬ | ಜ್ಞಾನಿಸುತ್ತ | ಜಾನಿಸುತ್ತ |
| ೮ | ೧೨ | ೪ | ವರ ತರುಣಿ | ವರ ತರಣಿ |
| ೧೫ | ೨ | ೧ | ಧಿನೆದೆ | ಧಿನದೆ |
| ೨೦ | ೧೯ | ೧ | ಕತ್ತುರಿಯುಂ | ಕತ್ತುರಿಯಂ |
| ೨೦ | ೧೯ | ೪ | ಪೂಜ್ಯನಹುದು | ಪೂಜ್ಯನಹನು. |

# ಕವಿತಾಕಲಾಪ.

ಇದನ್ನು

**ವಿಠೋಬಾ ವೆಂಕ ನಾಯಕ ತೊರ್ಕೆ,**

( ಚಂದಿರಾನಂದ )

ಅಸಿಸ್ಟಂಟ ಮಾಸ್ತರ ಕನ್ನಡಶಾಲಾ ತೊರ್ಕೆ,

ಇವರು ರಚಿಸಿದರು.

**ತೊರ್ಕೆ.**



೧೯೨೯.

ಬೆಲೆ ೩ ಆಣೆಗಳು.

ಇದನ್ನು ನಾರಾಯಣ ಸುಬ್ರಹ್ಮಣ್ಯಶಾಸ್ತ್ರೀ ಛಡತಿ, ಇವರು ತಮ್ಮ
ಗೋಕರ್ಣದ ಶ್ರೀ ನಂದಿನೀ ಮುದ್ರಣಾಲಯದಲ್ಲಿ
ಮುದ್ರಿಸಿದರು.
ಮತ್ತು
ತೊರ್ಕೆಯೊಳಗೆ ಕನ್ನಡಶಾಲೆಯ ಉಪಶಿಕ್ಷಕರಾದ
ವಿಠೋಬಾ ವೆಂಕನಾಯಕ ತೊರ್ಕೆ ( ಚಂದಿರಾನಂದ )
ಇವರು ಪ್ರಕಟಿಸಿದರು.

# ಬರೆದು ಬಂದ ಅಭಿಪ್ರಾಯಗಳ ಸಾರಾಂಶ.

೧ **ಕವಿತಾ ಕಲಾಪ:—** ಈ ಪುಸ್ತಕದಲ್ಲಿ ದೇವತಾಸ್ತುತಿ, ವರ್ಣನೆ, ನೀತಿಬೋಧೆ ಮೊದಲಾದ ವಿಷಯಗಳ ಕವಿತೆಗಳು ಶರ, ಭೋಗ, ಭಾಮಿನಿ, ವಾರ್ಧಕಷಟ್ಪದಿಗಳಲ್ಲಿಯೂ, ಕಂದರಾಗಗಳಲ್ಲಿ ಯೂ ರಚಿತವಾಗಿವೆ. ವಾರ್ಧಕವೇ ಹೆಚ್ಚಾಗಿರುವದು. ಭಾಷಾಶೈಲಿಯು ಸುಲಭವಾಗಿಯೂ ಲಲಿತವಾಗಿಯೂ ಇದೆ; ವರ್ಣನೆಗಳೆಲ್ಲವೂ ಅಂದ ವಾಗಿಯೂ ಭಾವಗರ್ಭಿತವಾಗಿಯೂ ಇವೆ; ವಿಷಯ ವಿವರಣೆಯೂ ಸಲಕ್ಷಣವಾಗಿದೆ............. ಇತ್ಯಾದಿ.

ಅಕ್ಟೋಬರ, ೧೯೨೯. } **ಕರ್ಣಾಟಕ ಸಾಹಿತ್ಯಪರಿಷತ್ಪತ್ರಿಕೆ.**

---

೨ **ಕವಿತಾ ಕಲಾಪ:—** ಕನ್ನಡದಲ್ಲಿ ಕಾದಂಬರಿ ಮೊದ ಲಾದ ಗ್ರಂಥಗಳನ್ನು ಬರೆಯುವವರೇ ಹೆಚ್ಚು. ವರ್ಣನೆಗಳನ್ನು ಪದ್ಯ ರೂಪದಿಂದ ಬರೆಯುವವರು ತೀರ ಕಡಿಮೆಯೆಂದರೂ ಸಲ್ಲುವದು. ಆದ್ದ ರಿಂದ ಮಿ. **ತೊರ್ಕೆ** ಇವರ ಪದ್ಯರೂಪ ವರ್ಣನೆಯ ಪ್ರಯತ್ನವು ತುಂ- ಬಾ ಶ್ಲಾಘನೀಯವಾಗಿದೆ. ಕೆಲವೆಡೆಯಲ್ಲಿ ತಕ್ಕಂಥ ಶಬ್ದಗಳನ್ನು ಉಪ ಯೋಗಿಸುವ **ಹುಟ್ಟುಕಲೆಯು** ಇವರಿಗೆ ಸಾಧಿಸಿದಂತೆ ಕಾಣುತ್ತದೆ. **ಸೂರ್ಯೋದಯ, ಸೂರ್ಯಾಸ್ತ, ಗೇರಸಪ್ಪೆಯ ತಡಸಲು** ಮೊದ ಲಾದ ಸೃಷ್ಟಿಸೌಂದರ್ಯಗಳನ್ನು ಯಥಾರ್ಥ ಕಲ್ಪನೆಯಾಗುವಂತೆ ಭಾವ ಬೋಧಕವಾಗಿ ಬಣ್ಣಿಸಿದ್ದಾರೆ. ಒಟ್ಟಿನ ಮೇಲೆ ಕವಿತೆಯ ಸ್ವಾಭಾವಿಕ ಶೈಲಿಯು ಇವರ ಪದ್ಯಗಳಲ್ಲಿ ಒಡೆದು ತೋರುವಂತೆ ಇದೆ......ಇತ್ಯಾದಿ.

ನವಂಬರ, ೧೯೨೯. } ಸಂಪಾದಕ, **ಕನ್ನಡ ಪ್ರಾಥಮಿಕ ಶಿಕ್ಷಣ ಧಾರವಾಡ.**

---

ಈ ಪುಸ್ತಕವು ಮೆ॥ ಎ॥ ಇ॥ ಸಾಹೇಬ ದಕ್ಷಿಣಭಾಗರವರಿಂದ ಮಾಧ್ಯಮಿಕ ಶಾಲೆಗಳ ಸ್ಕಾಲರ್ಸ್ ಲಾಯಬ್ರರಿಗಳ ಉಪಯೋಗಕ್ಕಾಗಿ ಮಂಜೂರಾಗಿದೆ.

# ಮುನ್ನುಡಿ.

॥ ಭಾಮಿನಿ ಷಟ್ಪದಿ. ॥

ಮೆರೆಯುತಿಹ ಕರ್ಣಾಟಮಾತೆಯ । ಚರಣಸೇವೆಯ ಮಾಳ್ಪ-
ದೆಂದೇ । ಬರೆದೆನೀ "**ಕವಿತಾಕಲಾಪ**"ವ ಭಕ್ತಿಭಾವದಲೀ ॥
ಹರುಷದಿಂದೀ ಕೃತಿಯನಂಗೀ । ಕರಿಸಿದೊಡೆ ವಿದ್ಯಾಭಿ-
ಮಾನಿಗ. । ಳಿರದೆ ಋಣಿಯಾಗಿರ್ಪೆನಾನನವರತ ಸಜ್ಜನರೇ ॥೧॥

ಅರಿಯೆನ್ನೆ ವ್ಯಾಕರಣ ಸೂತ್ರವ । ನೆರೆ ಮೆರೆಯುತಿಹ ಶಬ್ದ-
ರತ್ನಾ- । ಕರದ ನೆಲೆಯಂ ಚಾರುತರ ಛಂದಸ್ಸುಲಕ್ಷಣವ ॥
ಪರಮಪಾವನಮೂರ್ತಿ ದೇವನ । ಚರಣಕಾನತನಾಗಿ
ಬರೆದೆನು । ಕರುಣವಿರಿಸುತೆ ತಪ್ಪುಗಳ ನೀವ್ ತಿದ್ದುತೋದುವದು ॥೨॥

ಪೂರ್ವಕವಿಗಳ ಕೃತಿಯ ನೋಡುತೆ । ಸಾವಧಾನದೊಳಿದನು
ಬರೆದೆನು । ಕೋವಿದರೆ ಕುಂದುಗಳನೀಕ್ಷಿಸುತೆನ್ನ ನಿಂದಿಸದೆ ॥
ನೀವು ಹಂಸಕ್ಷೀರನ್ಯಾಯವ । ಭಾವಿಸುತಲೀ ಕೃತಿಯ
ಕೊಳ್ವುದು । ಗಾವಿಲನು ನಾನಿರಲು ಕವಿಗಳೆ! ಪೇಳ್ವುದಿನ್ನೇನು ॥೩॥


ಗಂಡುಹುಡುಗರ ಕನ್ನಡಶಾಲಾ
ತೊರ್ಕೆ. ತಾ. ೧-೧೦-೨೯

**ವಿ. ವೆ. ತೊರ್ಕೆ.**
(ಚಂದಿರಾನಂದ)

# ವಿಷಯಾನುಕ್ರಮ.

॥ ಶ್ರೀ ಗಜಾನನಾಯ ನಮಃ ॥

# ಕವಿತಾಕಲಾಪ.

## ೧ ಶ್ರೀಗಣಪತಿಸ್ತುತಿ.

॥ ಮತ್ತೇಭ ವಿಕ್ರೀಡಿತ ವೃತ್ತ ॥

ವರಪೂಜ್ಯಂ ಗುಣಸಾಗರಂ ಗಣವರಂ
ನಿತ್ಯಂ ಸುಖಂ ದಾಯಕಂ ।
ಹರಕಂದಂ ಸುರವಂದಿತಂ ಭವಹರಂ
ಲಂಬೋದರಂ ಸುಂದರಂ ।
ವರಪಾಶಾಂಕುಶಧಾರಕಂ ಗಜಮುಖಂ
ಭಕ್ತೌಘಸಂರಕ್ಷಕಂ ।
ವರದಂ ಮೂಷಕವಾಹನಂ ಕರುಣಿಪಂ
ವಿಘ್ನೇಶ್ವರಂ ಪಾವನಂ ॥೧॥

## ೨ ಬಾ! ಪ್ರಭಾಕರನೆ! ಬೇಗ ಬಾ!!

॥ ವಾರ್ಧಿಕ ಷಟ್ಪದಿ ॥

(೧) ಧರಣಿಯೊಳ್ ತುಂಬಿರ್ದ ಕತ್ತಲೆಯು ಓಡುತಿದೆ ।
ಮಿರುಗುತಿಹ ತಾರೆಗಳ್ ಕಂದುತಿವೆ ಗಗನದೊಳು ।
ಸರಸರನೆ ಸೇರುತಿವೆ ಪುಲಿ-ಕರಡಿಗಳು ತಮ್ಮ ಗಂಹರವ ಭೀತಿಯಿಂದ ॥
ಕೊರಗುತಿದೆ ಕುವಲಿನಿಯು ನಿದ್ರಾಂಗನೆಯು ತಾನು ।
ಚರಿಸುತಿದೆ ದುಗುಡದಿಂದಡಗಿರ್ಪುದೆಲ್ಲಿ ನೀಂ ।
ಕರುಣಾವನಧಿ ತೋರಿಸೈ ಮುಖವ ಬಾರೈ! ಪ್ರಭಾಕರನೆ! ಬಾ ಬೇಗದಿಂ ॥

(೨) ಕರೆಯುತಿವೆ ಜನರನ್ನು ಸ್ವಾಗತಕೆ ಕೋಳಿಗಳು ।
ತರತರದ ಪುಷ್ಪಮಾಲಿಕೆಯನ್ನು ತರು-ಲತೆಗ- । ಳಿರದೆ
ಧರಿಸಿಹವು ಪವಮಾನತಾಂ ಗಂಧವಂ ವಹಿಸಿಹನು ಮುನಿಪರುಗಳು ॥
ವರಮಂತ್ರಘೋಷಮಂ ಗೆಯ್ಯುವರು ಹರುಷದಿಂ ।
ತರುಣಿಯರು ಜಲಪೂರ್ಣ ಕಲಶಮಂ ಪಿಡಿದಿಹರು ।
ಸರಸಿಜೆಯು ಮೊಗವೆತ್ತಿ ನಗುತಿಹಳು ಬಾರೈ ಪ್ರಭಾಕರನೆ! ಬೇಗದಿಂ ॥

(೩) ತುರುಮಂದಿ ಚಾಮರವ ಬೀಸುವವು ಭೃಂಗಗಳು ।
ಸರಸದಿಂ ಪಾಡುವವು ನವಿಲುಗಳು ನರ್ತಿಪವು ।
ವರರತ್ನಖಚಿತಮಾಗಿಹ ಸಿಂಹವಿಷ್ಟರವ ನಿಟ್ಟಿಹಳು ಮೂಡುವೆಣ್ಣು ॥
ವರರಂಗವಲ್ಲಿಯ ವಸುಂಧರೆಯು ಬರೆದಿಹಳು ।
ತರುಣಿಯರು ಪಾಲ್ಬೆಣ್ಣೆಗಳ ಪಿಡಿದು ನಿಂತಿಹರು ।
ಅರುಣತಾಂ ರಥಕೆ ತುರಗಂಗಳಂ ಪೂಡಿಹನು ಬಾರೈ ಪ್ರಭಾಕರನೆ! ಬಾ ॥

## ೩ ಶಂಖಪ್ರಲಾಪ.

॥ ರಾಗ ಕಾಂಬೋದಿ, ಝುಂಪೆ ತಾಳ ॥

ಒಡಹುಟ್ಟಿದವರ ಸಿರಿಯಿಂದಲೇನು? ।
ಪಡೆದ ವಿಧಿಯಂ ಬಿಡಿಸುವವರಿಲ್ಲ ಮನುಜಾ ॥ ಪಲ್ಲ ॥

ಸಿರಿ ತಾನು ಹರಿಯರಸಿಯಾಗಿ ಮೆರೆಯುತ್ತಿಹಳು । ಪರಮಭಕ್ತರ-
ವಳ್ಗೆ ಜನರೆಲ್ಲರು ॥ ವರ ಕೌಸ್ತುಭಾಭರಣ ವೈಕುಂಠ ಕಂಠದೊಳು ।
ಹರುಷದಿಂದಿರುತಿಹುದು ಪೇಳ್ವುದೇನೀಗ ॥ ೧ ॥

ಚಂದ್ರಮನು ಶೂಲಧಾರಿಯ ಲಲಾಟದೊಳಿಹನು । ಇಂದ್ರನಂ
ಸೇರಿಹುದು ಪಾರಿಜಾತಾ ॥ ವಂದ್ಯವಾಗಿಹುದು ಕಲ್ಪದ್ರುಮಂ
ಧರೆಯೊಳಗೆ । ಪೊಂದಿತ್ತೈ ಹಾಲಾಹಲಂ ಹರನ ಕೊರಲ ॥೨॥

ಹರಿ-ಹರ-ವಿರಿಂಚಿಗಳು ಪರಮಾಪ್ತರಾದೊಡೇಂ । ವರ ಕುಬೇರಂ
ಧನಾಧೀಶನಿರಲೇಂ ॥ ತಿರುಕುಳಿಯ ಕರದೊಳಗೆ ಸೇರಿ ನಾಂ
ಮನೆಮನೆಯ । ತಿರಿದುಂಬೆನಯ್ಯ ಕೂಗುತೆ ನಿತ್ಯ ನಿತ್ಯ ॥೩॥

## ೪ ವಿಷ್ಣುವೋ? ವಿಷ್ಣುಪದವೋ!

॥ ವಾರ್ಧಿಕ ಷಟ್ಪದಿ. ॥

(೧) ನೀಲಮೇಘಶ್ಯಾಮದಿಂದೆ ರಾರಾಜಿಸುವೆ ।
ಬಾಲನಹ ಧ್ರುವನಿಂಗಚಲಪದವನಿತ್ತು ಸಲೆ ।
ಪಾಲಿಸುವೆ ಖಗ ನಿನ್ನ ಮಂದಿರದೆ ನೆಲಸಿಹನು ಸರ್ವದಾ ನೀನನಂತ ॥
ಬಾಲೆಗಂಗೆಯ ಜನಕನೆಂದು ಪೇಳ್ವರು ನಿನಗೆ ।
ಲೀಲೆಯಿಂದಾಡುತಿದೆ ಭುವನ ನಿನ್ನೊಡಲಲ್ಲಿ ।
ಪೇಳು ನೀಂ ವಿಷ್ಣುವೋ ವಿಷ್ಣುಪದವೋ ತಿಳಿಯಲಾರೆನಾಂ ನೀನೆ ಧನ್ಯ ॥

## ೫ ಪಂಜರದ ಗಿಣಿಯ ವಾಣಿ.

॥ ಭೋಗ ಷಟ್ಪದಿ. ॥

ಪಕ್ಕಿಗಳಿರ! ಬಳಗದೊಡನೆ । ಚಿಕ್ಕಮರಿಗಳೊಡನೆ ನೀವು । ಕಕ್ಕುಲಾ-
ತಿಯಿಂದ ಹಣ್ಣು-ಹಂಪಲಂಗಳ ॥ ಮುಕ್ಕಿ ವನದೊಳಿರಲು ದುರ್ಮ ।
ನಕ್ಕೆ ತಕ್ಕ ತೆರದೊಳೆನ್ನ- । ನೆಕ್ಕಸಕ್ಕನೆಂಬುವೆಕ್ಕಸವದು ತಕ್ಕುದೇ ॥೧॥

ಕಳ್ಳನಲ್ಲ ಪಂಜರದೊಳು । ಖುಲ್ಲನಂತೆ ನಿಲ್ಲಲಿಲ್ಲ । ಬಲ್ಲಜನರ ಸಂಗ
ದಲ್ಲಿ ಮಾನಪೊಂದುತ ॥ ಒಳ್ಳೆ ಮಾತ ಕಲಿತ ಜಾಣ । ನಲ್ಲವೇನು?
ನಿಮಗೆ ದೊರೆವು- । ದೆಲ್ಲಿ ನನ್ನ ಸುಖವು ಗರ್ವವೇಕೆ ಮೂಢರೇ ॥೨॥

## ೬ ಕಡವರದೊಡನುಡಿ.

॥ ವಾರ್ಧಿಕ ಷಟ್ಪದಿ. ॥

(೧) ಪಿಡಿಪಿಡಿದು ಸುಡುಸುಡುತೆ ಬಿಡಬಿಡದೆ ಬಡಿಬಡಿಯೆ ।
ಮಡಿಮಡಿದು ನಡೆನೋಡಿ ಸಿಡಿಸಿಡಿದು ಕಿಡಿಕಿಡಿಯೆ ।
ಕಡಿಕಡಿದು ಕೆಡಿಕೆಡಿಸಿ ಕಡೆಗೂಡೆ ನಾಂ ಕಡುಹುಸಡಗರವ ನೀಡೆ ನೀಡೆ ॥
ಕೊಡುಕೊಡೆಂದಡಿಗಡಿಗೆ ಹುಡುಗರಡಿವಿಡಿಯೆ ತೊಡ- ।
ತೊಡಿಸಿ ಮುಂಡಾಡಿ ಕೊಂಡಾಡಿ ಗಾಡಿಯೊಳಾಡಿ ।
ಪಡೆವರನ್ನೊಡಗೂಡಿ ಕಡುಸುಖವಹುಡುಗರಂಪಡೆದವರುಪೊಡವಿಯೊಳಗೆ ॥

## ೭ ಹೊಲೆಯ ತಾಂ ಹೊಲೆಯನಲ್ಲ.

॥ ವಾರ್ಧಿಕ ಷಟ್ಪದಿ. ॥

(೧) ಪರನಾರಿಯರ ಮನಕೆ ತಂದವಂ ಬೆರೆದವಂ ।
ಪರನಿಂದೆಯುಂ ಮಾಳ್ಪ ಕೇಳ್ವ ಮಾನವನವಂ ।
ಪರಧನವ ಕದ್ದವಂ ಕಳಲು ಪೇಳ್ವಂ ಸಟೆಯ ನುಡಿವವಂ ಶೀಘ್ರಕೋಪೀ ॥

ಹೆರವರಪರಾಧಮಂ ಕ್ಷಮಿಸದಂ ಗರ್ವಿಪಂ ।
ದುರುಳರಾಶ್ರಯದೊಳಿಪ್ಪಂ ಪರಾನ್ನಾಪೇಕ್ಷಿ । ಪರರಿಗುಪಕಾರ-
ಮಂ ಮಾಡದಂ ಕಡು ಹೊಲೆಯ ಹೊಲೆಯ ತಾಂ ಹೊಲೆಯನಲ್ಲ ॥

## ೮ ಅಬಲೆಯರ್ ಪ್ರಬಲೆಯರ್ ಕಣಾ!!

॥ ವಾರ್ಧಿಕ ಷಟ್ಪದಿ ॥

(೧) ಅಂಧನೃಪಕಂದ ತಾಂ ಗಂಧರ್ವಬಂಧನದೆ ।
ನೊಂದಿರಲ್ ದ್ರುಪದನಂದನೆ ಬಿಡಿಸಲಿಲ್ಲವೇಂ । ಇಂದ್ರ-
ನಂದನನ ಚಿತ್ರಾಂಗದೆಯು, ಗಾಧಿಜನ ಮೇನಕೆಯು ಬೆರೆದುದಲ್ತೇಂ ॥
ಕಂದರಂ ವನಕಟ್ಟಲಿಲ್ಲವೇಂ ದಶರಥಂ । ಸುಂದರಿಯ
ನುಡಿಗೇಳ್ದು, ಮಡದಿಯರನೊಡಬಡಿಸೆ । ಕಂದರಾದರ್
ತ್ರಿಮೂರ್ತಿಗಳಬಲೆಯರ್ ಪ್ರಬಲೆಯರ್ ಕಣಾ! ವಿಶ್ವದೊಳಗೆ ॥

## ೯ ಗಂಗಾಪ್ರಲಾಪ.

॥ ವಾರ್ಧಿಕ ಷಟ್ಪದಿ. ॥

(೧) ಪರಮಾತ್ಮನೇ ಪಿತಂ ಸುಖನಿಲಯ ಸ್ವರ್ಗಮಂ ।
ತೊರೆದು ನಾಂ ಪಾರ್ವತೀವಲ್ಲಭನ ಮೆರೆಯುತಿಹ ।
ಶಿರದಲ್ಲಿ ನೆಲೆಸಿರಲ್ ಹಿಮಗಿರಿಯ ಮೇಲುರುಳಿ ಕಷ್ಟದಿಂ ಚರಿಸುತ್ತಲೀ ॥

ಧರಣಿಗೈತಂದು ಮಂದತ್ವಮಂ ತಾಳುತ್ತೆ ।
ಶರಧಿಯುಂ ಸೇರ್ದನೈ ಬಳಿಕೆನಗೆ ಪಾತಾಳ । ಬಿರ.
ವಾಯ್ತು ಸೊಗವಿಲ್ಲದಂತಾಯ್ತು ಸ್ಥಾನಮಂ ತೊರೆದರಿಂ ಕೆಟ್ಟೆನವ್ವಾ ॥

## ೧೦ ಗರ್ವಾಪಹಾರ.

॥ ಭಾಮಿನಿ ಷಟ್ಪದಿ. ॥

ಒಂದು ದಿನ ಕಮಲಜೆಯು ಗೌರಿಯು । ಇಂದುಮುಖಿ ಸರಸತಿಯು
ನಾರೀ- । ವೃಂದದೊಳು ತಮಗಾರು ಪಾಸಟಿ! ಹದಿಬದೆಯರಿಹೆವ್ರ ॥
ಎಂದು ಗರುವದೊಳಿರಲು ತಾನ್ಕೆ- । ತಂದನಲ್ಲಿಗೆ ಮುನಿಯು
ನಾರದ । ನಿಂದುವದನೆಯರವಗೆ ಮನ್ನಣೆಯಿತ್ತು ವ್ರೋದದಲಿ ॥೧॥

ಹರುಷವೀವುದು ನಿಮ್ಮದರುಶನ । ಪರಮಮುನಿಗಳೆ!
ಬಂದಿರೆಲ್ಲಿಂ- । ದಿರದೆ ಬೇಡ್ವೆವು ಕಂಡ ಸುದ್ದಿಯ ಪೇಳಬೇಕೆನಲು ॥
ಚರಿಸಿ ಭೂಲೋಕದಲಿ ಕಂಡೆನು । ಪರಮಶೀಲಳು ಅತ್ರಿಕಾಂತೆಯು ।
ತರುಣಿ ಕುಲದೊಳ್ ಮಿಗಿಲು ಸುಡು ಮಿಕ್ಕಾದತರುಣಿಯರಾ ॥೨॥

ಎನಲು ಮನದೊಳ್ ಸಹಿಸಲಾರದೆ । ವನಿತೆಯರ್ ನಿಜಧವರೊಳ-
ತ್ರೀ- । ಮುನಿಯ ಮಡದಿಯ ಶೀಲಮಂ ನೀವ್ ಪೋಗಿ ಕೆಡಿಸುವದು ॥
ಎನಲು ಹರಿ-ಹರ-ಬ್ರಹ್ಮರೆಂದರ್ । ಮನದಸೂಯೆಯ ತೊರೆದು
ಬಾಳಿರಿ । ಮನವು ಮೆಚ್ಚದು ಹೀನಕಾರ್ಯಕೆ ಪೂಜ್ಯಳನಸೂಯಾ! ॥೩॥

ಆಗದಾಗದು ರಾಗವಿರ್ಪೊಡೆ । ಪೋಗಿ ಪೋಗಿರಿ ಪೋಗದಿರ್ದೊ-
ಡೆ । ಈಗಲೇ ನಾವ್ ತೊರೆದು ನಿಮ್ಮನು ಬಾಳ್ವೆವೆಂದೆನಲು ॥
ಸಾಗರ ಶಯನ! ನಾಗಭೂಷಣ! । ನಾಗಶಯನಜರೊಂದುಗೂ
ಡುತೆ । ಸಾಗಿ ಬಂದರು ವಿಪ್ರರೂಪಗಳಿಂದ ಭೂತಳಕೆ ॥ ೪ ॥

ವಿಮಲ ಮೂರ್ತಿಗಳತ್ರಿಯಿಲ್ಲದ । ಸಮಯದೊಳಗಾಗಮಿಸಲವ-
ನಾ । ಶ್ರಮಕೆ ಬಿಸಿಲಿಂ ಪಸಿವಿನಿಂದಂ ಬಳಲಿದಹರಂತೆ ॥ ವಿಮ-
ಲಮುಖಿಯನಸೂಯೆ ನಯದಿಂ । ನಿಮಗೆ ಕುಶಲವೆ ಹರುಷಮಾ
ದುದು । ಸುಮನದಿಂದಂ ಬನ್ನಿರೆಂದಳ್ ಮಿಂದು ಭೋಜನಕೆ ॥೫॥

ಮಿಂದು ಮಡಿಯಂ ಧರಿಸಿಯುಣಲ್ಕೆ- । ತಂದತಿಥಿಚಯವನ್ನು
ಕಂಡಾ- । ನಂದದಿಂದಲಿ ಪೋಗಿ ಬಡಿಸಲ್ ಧಿಕ್ಕರಿಸಲವರು ॥
ಎಂದುವಿಲ್ಲದ ಪರಿಯ ಪರಿಕಿಸಿ । ನೊಂದು ಬೇಡಿದಳವರ ಮು
ತ್ತೇ- । ನೆಂದುಸುರಿ ನೀಂ ನಗ್ನದಿಂದಿಕ್ಕೆಂದರತಿಥಿಗಳು ॥ ೬ ॥

ಹೀನನುಡಿಯಂ ಕೇಳಿ ಮಾನುನಿ- । ಯೇನ ಮಾಡಲಿ? ಮನ್ನಿಸ-
ದೊಡಾಂ । ಹೀನಳೆಂಬರ್ ಪೋಗೆ ಬಡಿಸಲು ಮಾನವಿರದೆಂದು ॥
ಶಾನೆ ಯೋಚಿಸಿ ದೀನಳೆನ್ನಯ । ಮಾನಕಾಯುವದೆಂದು ಪತಿ-
ಯಂ । ಜ್ಞಾನಿಸುತ್ತ ಕಮಂಡಲೋದಕವನ್ನು ಸಿಂಪಡಿಸೆ ॥೭॥

ಶಿಶುಗಳಾದರ್ ಕಪಟವಿಪ್ರರ್ । ಪಸಿವಿನಿಂದತಿನೊಂದುಕೊಂಡಿರೆ ।
ಒಸೆದು ನಗ್ನದಿ ಬಂದು ಮೊಲೆಯುಣಿಸಿದಳು ಅನಸೂಯೆ ॥ ಹಸುಳೆ
ರನು ಒಲು ಕಕ್ಕುಲತೆಯಿಂ । ಕುಸುಮನೇತ್ರೆಯು ಮುದ್ದಿಸುತ್ತಂ ।
ಎಸೆವ ತೊಟ್ಟಿಲೊಳಿಟ್ಟು ಜೋಗುಳಪಾಡಿ ತೂಗಿದಳು ॥೮॥

ಅತ್ತ ಸರಸತಿ, ಗಿರಿಜೆ, ಸಿರಿಯರ್ । ಚಿತ್ತವಲ್ಲಭರೆಮ್ಮನುಳಿದಿ- ।

ನ್ನೆತ್ತ ಪೋದರೊ? ಪೋಗಿ ಕಾಲವು ಬಹಳವಾಯ್ತೆಂದು ॥ ಮತ್ತೆ
ನಾರದನನ್ನು ಕೇಳಲು । ಅತ್ರಿ ಮುನಿಯಾಶ್ರಮದೆ ನಿಮ್ಮಯ ।
ಚಿತ್ತವಲ್ಲಭರಿಹರು ಬಾಲಕರಾಗಿ ಸಂತಸದೆ ॥ ೯ ॥

ಎಂದೆನಲು ನಾವಂದುತಪ್ಪಿದೆ । ವಿಂದು ಗರ್ವವ ಬಿಟ್ಟು ಬೇಡ್ವೆವು ।
ಮಂದಮತಿಗಳು ನಾವು ಪತಿಗಳ ಕೊಡಿಸಬೇಕೆನಲು ॥ ನೊಂದು
ಮನದೊಳು ಬೆಂದು ಬಾಯ್ಬಿಡು । ವಿಂದು ಮುಖಿಯರ ಮೇಳ
ದೊಡನೈ । ತಂದು ನಾರದನೆಲ್ಲ ಸುದ್ದಿಯನತ್ರಿಯೊಡನೆಂದಾ ॥ ೧೦ ॥

ಕರವಮುಗಿವೆವು ಪರಮಶೀಲಳೆ! । ಕರುಣತೋರಿಸು ಸರಳಹೃದ
ಯಳೆ! । ಅರಿಯದಾದೆವು ನಿನ್ನ ಮಹಿಮೆಯನೆಂದು ಮೊರೆಯಿಡುವ ॥
ಸಿರಿಯ ಗೌರಿಯ ಶಾರದಾಂಬೆಯ । ಪರಮಪಾವನೆಯತ್ರಿಕಾಂತೆ
ಯು । ಕರೆದು ಮನ್ನಿಸುತವರ ಪತಿಗಳ ನೀಯಲಾಬಳಿಕ ॥ ೧೧ ॥

ಸಿರಿಮನೋಹರ-ಕಂಬುಕಂಧರ । ಸರಸಿಜೋದ್ಭವರುಗಳು ಹರುಷ
ದಿ । ಮೆರೆವ ತಮ್ಮಯ ನೈಜರೂಪವ ಧರಿಸಿ ಅನಸೂಯಾ ॥ ಧರಣಿ
ಯೊಳು ವರತರುಣಿಯಂದದೆ । ತರುಣಿ ಕುಲದೊಳ್ ಅತ್ರಿಮುನಿ-
ಸತಿ । ಮೆರೆವಳೆಂಬುದನರಿತೆವೈ ವರವನ್ನು ಬೇಡೆಂದರ್ ॥ ೧೨ ॥

ಸೃಷ್ಟಿ-ಸ್ಥಿತಿ-ಲಯ ಮೂಲರಾಗಿಹ । ಶಿಷ್ಟಮೂರ್ತಿಗಳನ್ನು ನೋ-
ಡುತ । ತುಷ್ಟಳಾಗುತ್ತ, ಪಾದಕೆರಗುತ, ನಗುತಲನಸೂಯಾ ॥
ಹುಟ್ಟುವದು ನೀವೆಲ್ಲರೊಂದೇ । ಹುಟ್ಟಿನಿಂದೆನ್ನುದರದೊಳ್ ಸ-
ತ್- । ಪುತ್ರನೋರ್ವನನೀವುದೆಂದಳು ವರವ ಬೇಡಿದಳು ॥ ೧೩ ॥

ವರವ ಕರುಣಿಸಿದಂತೆ ತರುಣಿಗೆ । ವರ ಕುಮಾರಕನೋರ್ವನುದ-
ಯಿಸೆ । ಕರೆದರಾತಂಗೊಲಿದು ದತ್ತಾತ್ರೇಯನೆಂದೆಲ್ಲರ್ ॥ ತರ-

ಳೆಯರಿ! ಮುನಿಸತಿಯ ಚರಣಕೆ । ನಿರುತಮೇಕೋಭಾವದಿಂದಲಿ ।
ಶಿರವ ಚಾಚಿರಿ ಪತಿಯ ಭಜಿಸಿರಿ ನಿಮಗೆ ಮಂಗಲವು ॥ ೧೪ ॥

## ೧೧ ಸ್ಥಾನಭ್ರಷ್ಟನಾಗಬೇಡ.

॥ ಶರ ಷಟ್ಪದಿ. ॥

ನೀರೊಳ್ ಸ್ಥಿರವಿರೆ । ಸಾರಸ ಕುಸುಮಂ । ತೋ-
ರಲ್ ದಿನಮಣಿ ಕಿರಣಗಳ ॥ ಭೂರಿ ಸುಗಂಧವ । ಬೀ
ರುತೆಬಾರೆನೆ । ಆರಡಿ ಕುಲ ಕಿತ್ತುದು ಮಧುವಾ ॥ ೧ ॥

ನೀರಂ ತೊರೆದುಂ । ಧಾರುಣಿಗೈತರೆ । ತೋರಲ್
ದಿನಮಣಿ ಕಿರಣಗಳಾ ॥ ಮೋರೆಯ ಕೊರಗಿಸೆ ।
ಸ್ವೈರಿಸದುರಿಯಂ । ಪಾರಿದವಾರಡಿ ಬೇರೆಡೆಗೆ ॥ ೨ ॥

## ೧೨ ಸೂರ್ಯಾಸ್ತಬಿಂಬ.

॥ ವಾರ್ಧಿಕ ಷಟ್ಪದಿ. ॥

(೧) ಅಸುರಸಂಹಾರದಿಂ ರಕ್ತಲೇಪಿತವಾದ ।
ಬಿಸಜನಾಭನ ಕರದ ಚಕ್ರವೋ! ಭಾವಿಸಲ್ । ಮಿಸುಪ
ಚಂದಿರವಟ್ಟೊ! ಕಾಂತನನಿದಿರ್ಗೊಂಬ ಪಶ್ಚಿಮಾಂಗನೆಯ ಪಣೆಯ ॥
ಬೆಸನದಿಂ ಪ್ರಾಗಂಗನೆಯು ಬಿಸುಟ ರಾಗಟೆಯೊ! ।
ಕುಸುಮಾಂಬನರಸಿಯಾರತಿಯು ಪೊಂದಟ್ಟೆಯೋ! ।
ಎಸೆವ ರತ್ನಾಕರನ ಮುಕುಟವೆಂಬಂತೆ ಭಾಸಿಪುದು ಸೂರ್ಯಾಸ್ತಬಿಂಬ ॥

## ೧೩ ಪರನಾರೀಬಯಕೆಯು ನರಕಕ್ಕೆ ದಾರಿಯು.

॥ ವಾರ್ಧಿಕ ಷಟ್ಪದಿ. ॥

(೧) ಸೀತೆಯಂ ಕದ್ದೊಯ್ದ ಲಂಕಾಧಿಪತಿಯ ಕುಲ ।
ಪಾತವಾದುದು ಕೃಷ್ಣೆಯಂ ಬಯಸಿ ಕೀಚಕಂ । ಯಾತನೆಯ
ಪೊಂದುತಸುವನ್ನು ತೊರೆದಂ ಗೌತಮನ ಪತ್ನಿಯಂಬೆರೆಯಲು ॥
ಮಾತಂಗವಾಹನಂ ಛಿದ್ರಮಯನಾದನೈ ।
ಭ್ರಾತೃದಾರಾಪಹರಣಂ ಗೆಯ್ವ ವಾಲಿ ತಾಂ ।
ಪಾತಕಕೆ ಬಿದ್ದನೈ ಬಾಣದಿಂ ಪರನಾರಿಯರ ನೋಟ ಕೇಡಾಗದೇ ॥

## ೧೪ ದಾತನಾದ ಕರ್ಣ.

॥ ವಾರ್ಧಿಕ ಷಟ್ಪದಿ. ॥

(೧) ಇನನಣುಗ ಕರ್ಣ ತಾಂ ಬಾಣಗಳ ಕೈಕೊಂಡು ।
ವನವನಾಂತರಗಳಲಿ ಸಂಚರಿಸಿ ಬೇಂಟೆಯೊಳ್ । ಮನಸಿ
ನೊಳ್ಕರಗುವನು ಹರಿಯ ಬಾಯೊಳು ಬಿದ್ದ ಹರಿಣಗಳ ನೋಡಿ ಮಿಡುಕಿ ॥
ಅನುತಾಪದೊಳು ಸಿಲ್ಕಿ ಬಳಲುತಿಹ ಜೀವಿಗಳ ।
ತನುವನುಳಿಸದೆ ತನ್ನ ಮಂದಿರಕೆ ತೆರಳನೈ ।
ಜನಪದದೊಳಾರಿಲ್ಲ ಕರ್ಣಂಗೆ ಜೋಡೆನಿಪ ಜೀವದಾತಾರರ್ಕಳು ॥

(೨) ಕರಿಪುರದ ನರಪತಿಯ ಸಹಜಾತನೊಂದು ದಿನ ।
ಗಿರಿಗಂಹರದೆ ಕಾಡಮೃಗಗಳನು ಸಂಹರಿಸೆ । ಚರಿಸುತಿರೆ
ಕಾಡಾನೆಯೊಂದು ಕಡುಮುಳಿದು ದುಡುಕುತ್ತ ಬೆನ್ನಟ್ಟಿಬರಲು ॥
ಹರಹರಾ! ಕಾಡಾನೆಯೆನ್ನೊಡಲನೊಡೆಯುವದು ।
ಧರೆಯೊಳಗೆ ಕಾಯ್ವರಾರಿಲ್ಲವೆನುತವ ನೋಡು ।
ತಿರಲದಂ ಕಂಡು ಕರ್ಣಂ ಬಾಣದಿಂದೆಚ್ಚು ಕೆಡಹಿದನು ಭೂತಳಕ್ಕೆ ॥

(೩) ದಿನದಿನಕೆ ಸೂರ್ಯತನಯನ ಮನೆಯ ಬಾಗಿಲ್ಗೆ ।
ಜನನಿಕರ ಬರುತಿಹುದು ಕೊಡುಕೊಡೆಮಗೆಂದು ಧನ- ।
ಕನಕ-ರತ್ನಾಭರಣ-ವಸ್ತ್ರ-ಧಾನ್ಯಂಗಳಂ ಕೊಡುವನೈ ಬೇಡಿದರ್ಗೆ ॥
ಜನಪದದೆ ಪೆಸರಾಯ್ತು ಕೊಡುಗೈಯ ದೊರೆಯೆಂದು ।
ಧನದಿಂದ ಬರಿದಾಯ್ತು ಅಂಗರಾಜ್ಯದ ಕೋಶ ।
ಘನದಾನದಿಂ ತುಂಬಿ ತುಳುಕಿತ್ತೈ ವಿಖ್ಯಾತ ದಾತ ಭೂನಾಥನಿಂದ ॥

(೪) ಒಂದು ದಿನ ವೈರಿಯೋರ್ವನು ಕರ್ಣನಿದ್ದೆಡೆಗೆ ।
ಬಂದು ನಿನ್ನಯ ಶಸ್ತ್ರವೊಂದನೆನಗೀಯೆನಲು ।
ಮುಂದೆ ಮಲೆತೈತಪ್ಪ ವೈರಿಗಳ ಕೊಲ್ವ ಬಲವುಳ್ಳ ಶಸ್ತ್ರವನೀಯೆನು ॥
ಎಂದು ಪೇಳ್ವನೆ! ತಾನು ನಿಶ್ಶಸ್ತ್ರನಪ್ಪೊಡಂ ।
ಮುಂದೆ ತಾಪೀ ದಾನಬಲದಿಂದೆ ವೈರಿಗಳ । ಕೊಂದಪೆಂ
ಬಂದವನ ಪಿಂದೆ ಕಳುಹುವದುಚಿತಮಲ್ಲೆಂದು ಕೊಟ್ಟನವಗೆ ॥

(೫) ತನ್ನ ಪುತ್ರನೆ ಧಾತ್ರಿಯೊಳು ವೀರಯುತನಾಗಿ ।
ಬನ್ನಗಳ ನೀಗಿ ಸಂತಸದಿಂದ ಬಾಳ್ವುದೈ ।
ಇನ್ನೇನ ಮಾಳ್ಪುದೈ ಶಸ್ತ್ರಾಸ್ತ್ರವಿದ್ಯೆಯೊಳು ಜಾಣನೈ ಕರ್ಣನೆಂದು ॥
ತನ್ನ ರೂಪವ ಮರೆಸಿ ದೇವೇಂದ್ರ ಕಪಟದಿಂ ।
ನಿನ್ನ ಕೀರ್ತಿಯ ಕೇಳಿ ಬಂದೆನ್ನೆ ಕರ್ಣನೇ ।
ನಿನ್ನೀ ಕವಚ ಕುಂಡಲಂಗಳಂ ಬೇಡುವೆಂ ನೀಡೆನಲು ಕೊಡದುಳಿದನೇ ॥

(೬) ಅತಿಥಿಯೋರ್ವನು ಬಂದು ಭಾಸ್ಕರಜನೇ ನಿನ್ನ ।
ಸುತನ ಕತ್ತನು ಕತ್ತರಿಸಿ ಯೆನಗೆ ನೀನಿಂದು । ಅತಿಮಧುರ
ಪಾಕಮಂ ಬಡಿಸಿದೊಡೆ ಸಂತಸದಿ ಪೋಪೆನಿಂತೆನಲು ಬಳಿಕ ॥
ಸತಿಯೊಡನೆ ಕಳವಳಿಸದಿರು ಸುತನ ಕೊಲ್ಲುವೆಂ ।
ಖತಿಯ ತೋರಲುಬೇಡ ನೀನೆಂದು ತಕ್ಷಣಕೆ । ಅತಿಥಿಯುಂ
ಸಂತೈಸಿ ಕಳುಹಿದನು ವೃಷಕೇತು ಜನಕನಂಪೋಲ್ವರುಂಟೇ ॥

(೭) ಕುರುಸೇನೆಗಧಿಪ ತಾನೆನಿಸಿ ರವಿಸುಕುಮಾರ ।
ಕುರುಕ್ಷೇತ್ರದೊಳ್ ಕಾದುತಿರೆ ಧರ್ಮಸಂಜಾತ । ಸೆರೆಯೊ-
ಳಗೆ ಸಿಲ್ಕಿರಲು ಪವಮಾನ ಸುತ-ನಕುಲ-ಸಹದೇವರಂತೆ ಸೋಲ್ತು ॥
ವರಮಾತೆ ನಿಜಮಾತೆಯೆನಿಸಿರ್ದ ಕುಂತಿಯಂ ।
ಸ್ಮರಿಸಿ ಸೆರೆಯಾಳುಗಳ ಶಿರಗಳಂ ಖಂಡಿಸದೆ ।
ವರಜೀವದಾನಮಂ ಮಾಡಿದಂ ತೋಷದಿಂ ಪಗೆಗಳ್ಗೆ ಬಂಧುಗಳ್ಗೆ ॥

(೮) ಕಡುಪರಾಕ್ರಮಿಯಾದ ನರನೊಡನೆ ಪೊಗಳ್ವಂತೆ ।
ಕಡುಮುಳಿದು ಕಾದುತಿರೆ ಸಮರದೊಳ್ ಮನದೊಳಗೆ ।
ಪೊಡವಿಯೊಳ್ ಶಸ್ತ್ರಾಸ್ತ್ರವಿದ್ಯೆಯೊಳು ಬಲ್ಲಿದನು ಕೌಂತೇಯನೆಂದು ॥
ಪೊಡವಿಯಂ ನೋಯಿಸೆಂ ವೀರಪುತ್ರನ ಕೊಂದು ।
ಮಡಿವನೈ ಮನುಜನೆಂಬುದನರಿತು ವೀರೇಶ । ಮಡಿ-
ಯಲಾ ಪಗೆಯಿಂದ ಪೂಮಳೆಯು ಸುರಿಯಿತ್ತೈ ಕರ್ಣನೇ ದಾತನೆಂದು ॥

 

## ೧೫ ಪತಿವ್ರತೋಪದೇಶ.

ಸತಿಯಳಿಗೆ ಪತಿಯೆ ತಾ ಗತಿಯೆಂದು ನಂಬುವದು ॥
ಪತಿಸೇವೆಯಿಂದ ಬಹು ಸುಖವು ಲಭಿಸುವದು ॥ ಪಲ್ಲ ॥

ತಂದೆ-ತಾಯ್ಗಳು ನಿಮ್ಮ ಚಿಕ್ಕಂದು ಪಾಲಿಸುತ ।
ಮುಂದೆ ಹಿತವನು ಬಯಸಿ ವರನನ್ನು ಹುಡುಕಿ ॥
ಸುಂದರಾಂಗನು ಯಾರು? ಗುಣವಂತನಾರೆಂದು ।
ತಂದು ಲಗ್ನವ ಗೆಯ್ದು ಮೋದಹೊಂದುವರು ॥ ೧ ॥

ಅತ್ತೆಮನೆಯೊಳು ನಿಂತು ಮಾವ-ಭಾವಂದಿರನು ।
ನಿತ್ಯದೊಳು ಸೇವಿಸುತ ಪತಿಯಾಜ್ಞೆಯಿರಲು ॥
ಚಿತ್ತಶಾಂತತೆ ಪಡೆದು ಸುಗುಣೆಯೆಂದೆನಿಸುತ್ತೆ ।
ಪೆತ್ತ ತಾಯ್ತಂದೆಗಳ ಪೆಸರ ಮೆರಿಸುವದು ॥ ೨ ॥

ಪರಮತೀರ್ಥಗಳೇಕೆ? ಜಪ-ತಪಸ್ಸುಗಳೇಕೆ? ।
ಪರಮಪೂಜ್ಯನ ದಯದಿ ಪುಣ್ಯ ಘಟಿಸುವದು ॥
ವರಕಾಂತ ಪರಮಾತ್ಮನೆಂದರಿದು ಸಂತತಂ ।
ವರಪಾದವನು ಪಿಡಿದು ಪಾಪ ಕಳೆಯುವದು ॥ ೩ ॥

ತರತರದ ಕಾರ್ಯಗಳಿಂದ ಬೇಸರಪಟ್ಟು ।
ಹರಿಹಾಯ್ವ ನಿಮ್ಮರಸನನ್ನು ಕರೆತಂದು ॥
ಸರಸ ಸಲ್ಲಾಪದಿಂ ಮನವ ಸಂತಸಪಡಿಸಿ ।
ಅರಿಕೆಮಾಡುವದು ನೀವ್ ಮನೆಗೆಲಸದೊಳಗೆ ॥ ೪ ॥

ದೊಡ್ಡವರ ಮಗಳೆಂದು ವಿದ್ಯೆ ಕಲಿತವಳೆಂದು ।
ಗುದ್ದಾಡಿ ಗಂಡನೊಳು ದೂರಾಡಬೇಡ ॥

ಇದ್ದುದಿಲ್ಲೆನ್ನುತ್ತೆ ಪತಿಯನ್ನು ಪೀಡಿಸದೆ ।
ಬಿದ್ದುಬೇಡುತಲಿಲ್ಲದುದನು ತರಿಸುವದು ॥ ೫ ॥

ತನ್ನ ತಾಯ್ತಂದೆ ಬಾಂಧವರು ಬಂದಿಹರೆಂದು ।
ಮನ್ನಿಸುತೆ ಪಕ್ವಾನ್ನ ಬಡಿಪುದತಿಶಯದಿ ॥
ಭಿನ್ನಭೇದವ ಮಾಡುವದು ಕಾಂತನಾಪ್ತರೊಳು ।
ಚನ್ನೆಯಿದು ತರವಲ್ಲವೆಲ್ಲರುಪಚರಿಸು ॥ ೬ ॥

ಚಾಡಿಗಾರರ ನುಡಿಗೆ ಕಿವಿಗೊಟ್ಟು ನಾಲ್ವರೊಳ- ।
ಗಾಡುಂಬ ಕಾಂತನೊಳು ಮನೆಯ ದೂಷಣೆಯ ॥
ನಾಡುತೊಂಟಿಗರಾಗಿ ನರಳುತಿದ್ದವರೀಗ ।
ನೋಡಿಕೊಂಡಿಹರೊಡಕು ಕೆಡಕು ನಿಶ್ಚಯವು ॥ ೭ ॥

ಕಾಂತನಿಲ್ಲದ ಕಾಲದಲ್ಲಿ ಭೂಷಣವೇಕೆ? ।
ಭ್ರಾಂತಿಯಿಂ ಪರರೊಡನೆ ಮಾತಾಡಬೇಕೆ? ॥
ಪಾಂಥಿಕರ ಕೇಳುತೆಲ್ಲಿರ್ಪನೆಂತಿಹನೆಂದು ।
ಕಾಂತ ಬರುತಿರುವ ದಾರಿಯನೆ ನೋಡುವದು ॥ ೮ ॥

ಸಿರಿವಂತನಾದರೇಂ? ತಿರಕನಾಗಿರಲೇನು? ।
ಸಿರಿಕೃಷ್ಣನಂತೆ ಕಾಂತನ ಪೂಜಿಸುವದು ॥
ತರುಣಿ! ಪತಿಯನು ನೀನು ಭಕ್ತಿಯಿಂದುಪಚರಿಸೆ ।
ವರ ಶಕ್ತಿ-ಯುಕ್ತಿ-ಸಂತತಿ-ಕೀರ್ತಿಯಹುದು ॥ ೯ ॥

## ೧೬ ದುಷ್ಕೃತ್ಯಕ್ಕೆ ತಕ್ಕ ಪ್ರಾಯಶ್ಚಿತ್ತ.

॥ ವಾರ್ಧಿಕ ಷಟ್ಪದಿ. ॥

(೧) ಒಂದು ಕಾಕವು ತನ್ನ ದೇಹವನು ಸಲೆ ಬಣ್ಣ ।
ದಿಂದ ಸಿಂಗರಿಸಿ ಹಂಸಾಳಿಯೊಳು ಸೇರಿರಲ್ । ಒಂದನೊಡ
ನೊಂದು ಸಂಭಾಷಿಸುವ ಸಮಯದೊಳ್ ನೈಜದಿಂ "ಕಾಕಾ"ಯೆನೆ ॥
ಅಂದವನು ತಿಳಿದದರ ನಿಂದ್ಯನೇ! ಕಪಟತನ ।
ದಿಂದಿಹುದು ತಕ್ಕುದಲ್ಲೆಂದು ಹಂಸಗಳುಮನ । ಬಂದಂತೆ
ಬೈದು ಚುಂಚುಗಳಿಂದ ಚುಚ್ಚುತ್ತೆ ಕೊಂದವದನೇನೆಂಬೆನು ॥

## ೧೭ ಸತ್ಯಪ್ರಭಾವ.

॥ ಭೋಗ ಷಟ್ಪದಿ. ॥

ದಿನಪ ನೀನು ಬೆಳಗುತಿರುವೆ । ದಿನದೆ ಧರೆಯ ಮೇಘದೊಳಗೆ ।
ದಿನದಿನಕ್ಕೆ ಸೆರೆಯಬಿದ್ದು ತೊಳಲಿ ಬಳಲುವೆ ॥
ಜನರು ನಿಂದಿಸುವರು ಬಿಡದೆ । ಇನನು ಹಿಮಕೆ ಬೆದರುತಿಹನು ।
ಮನದೆ ಕಾಂತಿ ಹೀನನೆಂದು ಗ್ರಹಣಕಾಲದೆ ॥ ೧॥

ಮೆರೆಯುತಿಹೆನು ದಿನೆದೆ, ನಿಶೆಯೊ । ಳಿರದೆ ಸರ್ವ ಧರಣಿಯಲ್ಲಿ ।
ಅರಿಗಳಿಲ್ಲವೆನಗೆ ನಿತ್ಯನಿಹೆನು ದಿನಪನೇ ॥
ಒರೆಯುತಿಹುದು ಲೋಕ ಸತ್ಯ । ವಿರಲು ಭೀತಿಯಿಲ್ಲವೆಂದು ।
ಪರಮ ಶಾಂತ ಮೂರ್ತಿ ಚಂದ್ರನಿಂದ ಧನ್ಯನು ॥ ೨॥

## ೧೮ ಗೇರಸಪ್ಪೆಯ ತಡಸಲು.

॥ ವಾರ್ಧಿಕ ಷಟ್ಪದಿ. ॥

(೧) ಮೈಸೂರ ಸೀಮೆಯೊಳಗುದಯಿಸಿದ ಲಲಿತಾಂಗಿ ।
ಮೈಸಿರಿಗೆ ಲಕ್ಕಣದ ತೊಡವುಗಳ ತೊಟ್ಟು ತಾಂ । ತೋಷದಿಂ
ದಿನಿಯನಾಗರಕೆ ಕಿರಿದೆಡೆಯ ಪೋಗಲ್ ಜನ್ಮಭೂಪ್ರೇಮದ ॥
ಪಾಶದಲಿ ತೊಡರ್ದು ನೆರೆಮರುಗುವಟ್ಟು ಚಿಂತೆಯಿಂ ।
ದಾಸತಿಯು ನೇತ್ರಂಗಳಿಂ ಸುರಿಸೆ ಕಣ್ಣೀರ ।
ರಾಶಿ ಮೆಲ್ಲನೆ ಹರಿದು ಡಂಗುರವ ಸಾರುತ್ತ ತಾಂ ಶರಾವತಿಯೆಂದುದು ॥

(೨) ಚಂದದಿಂದೀ ಶರಾವತಿ ಮುಂದೆ ತಾಂಪೋಗಿ ॥
ಪೊಂದಲಾ ಸಹ್ಯಾದ್ರ್ಯಗಾಧ ಶಿರದೊಳು ಕಾಂಬ ।
ಚಂದವಾದಬ್ಬರದ, ಬಾಣ, ರಾಜಾ, ಗೌರವನಿತೆ ತಡಸಲುಗಳೀಗಾ ॥
ಮುಂದಭಾಗ್ಯನು ನಮ್ಮಯೆಸಕಮಂ ನೋಡದವ ।
ನಂಧಕನ ತೆರದಿ ನಾಣ್ನುಂದಿಪನು ಹೀಗೆಂದು । ನಿಂದಿ-
ಸುತ ಕುಂದಿಲ್ಲದಿರ್ಪವವು ಸಂಭ್ರಮದಿ ಗೇರ್ಸಪ್ಪೆಮೂಡಲದೊಳು ॥

(೩) ಅಲ್ಲಿಗಲ್ಲಿಗೆ ತನ್ನ ಚಲ್ವಿಕೆಯ ಚಲ್ಲುತ್ತ ।
ಜೊಲ್ಲ ಜೊಲ್ಲನೆ ಬೀಳ್ವ ಕಟ್ಟುದ್ದ ಪರಿವಡೆದ ।
ಬಲ್ಲುಲಿಯ ಸಲಿಲಗಳನೇನೆಂದು ಬಣ್ಣಿಸಲಿ "**ರಾಜಾ**"ನ ಪತ್ತೆಸಾರ್ದು ॥
ಪುಲ್ಲವಡಿಗಿತಿಯ ಕರಪಲ್ಲವದೊಳೆಸೆವ ಬಹು- ।
ಮಲ್ಲಿಗೆಯ ಮೊಗ್ಗೆಗಳೊ! ರತ್ನದೊಳ್ ಸರಗಳೊ? ।
ಸಲ್ಲಲಿತ ಲಲನೆಯರ ಪಲ್ಲುಗಳೊ! ಪೇಳಲಚ್ಚರಿಯಾಯ್ತುದೇನೆಂಬೆನು ॥

(೪) ಸಾಟಿಯಾರಬ್ಬರದೆ ಪೇಳೀಗ ವನಗೆ ನೀಂ ।
ನೋಟಕರ ಚಿತ್ತಚಾಂಚಲ್ಯಮಾಳ್ಪೆನೆನುತ್ತ । ಮಾಟದಿಂ
'ರಾಜಾ'ನ ಹಿಂದೊಂದು ಗಂಹರವ ಸೇರಿ**ತಬ್ಬರ** ರೋಷದಿ ॥

ಓಟದಿಂ ಜಲಶರಂಗಳ ಬಿಡುತ ತುರಿಪದಿಂ । ನೋಟ-
ವೇ ಪೊಸಪೊಸತು ಕಾಂಬಂತೆ ಚಂದದಿಂ । ದಾಟವಾಡುತ
ಮೇಲೆ ಕೆಳಗಾಗಿ ಪೂಬಾಣನಂ ಮೀರುವುದು **ಬಾಣವು** ॥

(೫) ಸರಸದಿಂ ನೊರೆದುಂಬಿ ಮೆಲ್ಲಮೆಲ್ಲನೆ ಹರಿದು ।
ಸರತಿಯಿಂ ಕೊಳ್ಳದಲಿ ಕಲ್ಲು-ಸೀರ್ಗಳ ಮೇಲೆ ।
ಎರಚುವದು ನೀರ ಮುತ್ತಿನಹಾರ ವರ್ಣನಾತೀತವೀ ರಮಣೀಯತೆ ॥
ತರತರದ ನೋಟಗಳ ಬೀರುತ್ತೆ ಜನರನ್ನು ।
ಮರುಳುಗೊಳಿಸುತ್ತೆ ತಾನುರುತರದ ಸೊಬಗಿನಿಂ ।
ತರುಣಿಯರ ಪೆಸರನ್ನು ನಿಂದಿಸುತ್ತಾತಾಣದಲ್ಲಿಹುದು **ಗೌರವನಿತಾ** ॥

(೬) ಕೊಳ್ಳದೊಳಗಿಳಿದು ನೋಡಲು ಫಾಲೊ! ಸಲಿಲವೋ!
ಅಲ್ಲಲ್ಲಿ ತೋರ್ಪ ಬಹು ಬಣ್ಣಗಳ ತೋರಣಗ- । ಳೆಲ್ಲ
ನನೆಗಣೆಯನ ಶರಂಗಳೋ! ತಿಳಿಯದಾತಾಣದೊಳದೇಂ ರಮ್ಯವೋ! ॥
ಅಲ್ಲಲ್ಲಿ ಬಂಡೆಗಳ ಬುಡಸಾರ್ದು ಕಣ್ದೆರೆದು ।
ನಿಲ್ಲು ನಿಲ್ಲೆನ್ನುವದು ನೋಡಲಲ್ಲಿಂದಲ್ಲಿ । ಎಲ್ಲರಿಂ ಬಣ್ಣಿಸ-
ಲಸಾಧ್ಯ ತೋರ್ಕೆಯು ಜೋಗು **ವಿಠಲೇಶನಿಂ** ಪುಟ್ಟಿರೆ ॥

## ಸುಗುಣಾಭರಣಂ.

ಕಂದ.

ಕೊರಲಂ ಸುತ್ತಿದ ಸರ್ಪಂ । ಮುರಳುವದೇಂ ಬರಿದೆ
ತಾನು ಕಚ್ಚದೆ ಮರುಳಾ ॥ ದುರುಳರ ಸಂಗದೊಳಿರ್ಪಂ ।
ಗುರಿಯಾಗನೆ ಬಂಧನಕ್ಕೆ ಸುಗುಣಾಭರಣಾ ॥ ೧ ॥

ಸುರಲೋಕಂ ಪಾಳ್ಪೋಕುಮೆ । ನರಿಯೊಳಿಡೆ ಬಿಡದೆ
ಸಜ್ಜನರುಗಳೆ ದುಷ್ಟಾ- ॥ ತ್ಮರು ಸಲೆ ನಿಂದಿಸೆ ಸತತಂ ।
ಕೊರತೆಯದೇಂ ಸಜ್ಜನರ್ಗೆ ಸುಗುಣಾಭರಣಾ ॥ ೨ ॥

ಕೋಗಿಲೆಯ ಬಣ್ಣಮುಳ್ಳೊಡೆ । ಕಾಗೆಗೆ ನಾವ್ ಕರೆಯಬಹುದೆ
ಕೋಗಿಲೆಯೆಂದೇ ॥ ಲೋಗರ ಮನವಂ ತಿಳಿಯದೆ ।
ಸೋಗಿಗೆ ಮರುಳಾಗಬೇಡ ಸುಗುಣಾಭರಣಾ ॥ ೩ ॥

ಕಾನನದೊಳು ಬೆಳದಿಂಗಳು । ತಾನುರೆ ಬಿದ್ದಿರಲು
ಮಾನವಂಗೇನದರಿಂ ॥ ಜೀನನ ಕೈಯ್ಯೊಳ್ ಧನವಿರ- ।
ಲೇನದನುರಿಗಿಕ್ಕುದಲ್ತೆ ಸುಗುಣಾಭರಣಾ ॥ ೪ ॥

ನರಿ ತಾಂ ತನ್ನಯ ಮೈಯೊಳ್ । ಬರೆಯನ್ನಿಳಕೊಂಡರೇನು
ಪುಲಿಯಪ್ಪುದೆ ಪೇಳ್ ॥ ಅರಿವಿಲ್ಲದವನ ಕಜ್ಜಂ ।
ಪರಿಹಾಸ್ಯಕೆ ಬೀಳದಿರದೆ ಸುಗುಣಾಭರಣಾ ॥ ೫ ॥

ವಾನರನ ಕರದೊಳಿರ್ದೊಡೆ । ಮಾಣಿಕವದರಿಂದಲೇನು
ಫಲವೈ ಮನುಜಾ ॥ ಹೀನನ ಬಳಿಯೊಳ್ ಘನವಿ- ।
ದ್ಯಾನಿಧಿಯಿರಲೇನು ಫಲವು ಸುಗುಣಾಭರಣಾ ॥ ೬ ॥

ನೀರೇರಲು ತಾಂ ಹಿಗ್ಗದು । ನೀರಿಳಿಯಲು ಮತ್ತೆ ಕುಗ್ಗ-
ಹಂಬುಧಿ ನಿಜದಿಂ ॥ ಸೇರಲು ಸಿರಿಯುಬ್ಬದಿರೈ ।
ಜಾರಲ್ ವ್ಯಥೆ ಮಾಡಬೇಡ ಸುಗುಣಾಭರಣಾ ॥ ೭ ॥

ಇರುವೆಯು ತಾಂ ಬೇಸಿಗೆಯೊಳು । ಭರದಿಂ ದುಡಿದಿಟ್ಟು ಕೂತು
ತಿನ್ನದೆ ಮಳೆಯೊಳ್ ॥ ಹರೆಯದೆ ಸಂಗ್ರಹಿಸಿಟ್ಟರೆ ।
ಜರೆಯೊಳ್ ಸುಖವಹುದು ಕೇಳು ಸುಗುಣಾಭರಣಾ ॥ ೮ ॥

ಬಂಗಾರದ ಚೂರಿಯಿದೆಂ- । ದಂಗಕ್ಕಾಲಿಂಗಿಸಲ್ಕೆ
ಸೀಳದೆ ಅಪರಾ- ॥ ಧಂಗಳ ನೆಗಳ್ದಂ ಮಗನೆಂ- ।
ದಂಗೀಕೃತ ಮಾಡಬೇಡ ಸುಗುಣಾಭರಣಾ ॥ ೯ ॥

ಎಡೆಬಿಡದೆ ಬಿದ್ದ ನೋವಂ । ತಡೆಯುತೆ ಬೀಡನ್ನು ಕಟ್ಟು
ವದು ಜೇಡವು ತಾಂ ॥ ತೊಡರಂಗಳಿಗಂಜದೆ ನೀಂ ।
ಪಿಡಿದಿಹ ಕಾರ್ಯವನು ಮಾಡು ಸುಗುಣಾಭರಣಾ ॥೧೦॥

ಜಗುಲಿಯ ಹಾರದ ಮನುಜಂ । ಗಗನವ ತಾಂ ಹಾರಬಲ್ಲ
ನೇನ್ಮೆ ಮೊದಲೊಳ್ ॥ ಹಗುರಾಗಿಹ ಕಜ್ಜಗಳಂ ।
ಜಗ ಜನವೊಪ್ಪಂತೆ ಮಾಡು ಸುಗುಣಾಭರಣಾ ॥ ೧೧॥

ನೀರದ ಗರ್ಜಿಪುದೆನ್ನುತೆ । ನೀರಾಟವ ತೊರೆವುದೇನು
ಸಾರಮರಾಳಂ ॥ ದೂರಿಗರ ದೂರಿಗಳುಕದೆ ।
ಕೋರಿದ ಕಾರ್ಯಗಳ ಮಾಡು ಸುಗುಣಾಭರಣಾ ॥೧೨॥

ಸಾರ ಮರಾಳಂ ಪಾಲೊಳ್ । ಸೇರಿಹ ನೀರನ್ನು ಬೇರೆ
ಮಾಡುತೆ ಕುಡಿಗುಂ ॥ ದೂರಿರಿಸು ಪರರ ಕುಗುಣವ ।
ಸೇರಿಸು ಸದ್ಗುಣವ ನೀನು ಸುಗುಣಾಭರಣಾ ॥೧೩॥

ಕಾಗೆಗೆ ಪಾಲಂ ಕುಡಿಸಲು । ಕಾಗೆಯು ತಾಂ ಬೆಳ್ಳಗಪ್ಪು-
ದೇನ್ಮೆ ಮನುಜಾ ॥ ಏಗೆಯ್ದೊಡ ಮಧಮಂ ತಾಂ ।
ನೀಗನು ಕೀಳ್ಗೆಯ್ಮೆಯನ್ನು ಸುಗುಣಾಭರಣಾ ॥ ೧೪ ॥

ಕೆಸರೊಳ್ ಪುಟ್ಟಿದ ಕಮಲಂ । ಕೆಸರಂ ತಾಂ ಬಿಟ್ಟು ಮೇ-
ಲೆ ಶೋಭಿಸುತಿಹುದೈ ॥ ವಿಷಯದೆ ನೀಂ ಪುಟ್ಟಿದೊಡಂ ।
ಎಸೆಯುವ ನಾಕವನು ನೋಡು ಸುಗುಣಾಭರಣಾ ॥೧೫॥

ಕೊಳಕಾದ ಸಿಂಪೆಯೊಳ್ ಸಲೆ । ಬೆಳೆದಿಹ ಮೌಕ್ತಿಕವು
ರಾಜ ಮುಕುಟದೆ ನಿಲ್ಗುಂ ॥ ಪಳಿಯೇಂ ಸದ್ಗುಣವಂತಗೆ ।
ಕುಲಹೀನತೆಯಿಂದ ಕೇಳು ಸುಗುಣಾಭರಣಾ ॥೧೬॥

ರದಗಳ ಮಧ್ಯದೆ ಜಿಹ್ವೆಯು । ಪುದುವಾಳದೆ ತನ್ನ ಬುದ್ಧಿ
ಚಾಪಲ್ಯತೆಯಿಂ ॥ ಅಧಮರ ಮಧ್ಯದೆ ಮನುಜಂ ।
ಚದುರತೆಯಿಂದಿರಲುಬೇಕು ಸುಗುಣಾಭರಣಾ ॥ ೧೭ ॥

ಭತ್ತದ ತೆನೆಯದು ತನ್ನಂ । ಪೆತ್ತವಳೆನ್ನುತ್ತೆ ಭೂತಳಕ್ಕೆ
ನಮಿಪುದೈ । ನಿತ್ಯಂ ಮನುಜಂ ತನ್ನಂ ।
ಪೆತ್ತವರಿಗೆ ಬಾಗಬೇಕು ಸುಗುಣಾಭರಣಾ ॥ ೧೮ ॥

ಕತ್ತುರಿಯುಂ ಕೈಯೊಳ್ ಪಿಡಿ- । ದೆತ್ತೆತ್ತ ಚಲಿಸಿದೊಡಮಲ್ಲಿ
ವಾಸನೆ ಬಕ್ಕುಂ ॥ ಉತ್ತಮ ವಿದ್ವಾಂಸಂ ಸ- ।
ರ್ವತ್ರಂ ಸಲೆ ಪೂಜ್ಯನಹುದು ಸುಗುಣಾಭರಣಾ ॥ ೧೯ ॥

ಬಿಸಿಲೊಳ್ ಬಳಲುವನಂ ಸಂ- । ತಸದಿಂ ಕರೆತಂದು ತಣ್ಪಿ-
ಸೀವುದು ವೃಕ್ಷಂ ॥ ಹಸಿವೆಯೊಳು ಬಳಲುತಿಹನಂ ।
ಅಶನವ ನೀನಿತ್ತು ಕಾಯೊ ಸುಗುಣಾಭರಣಾ ॥ ೨೦ ॥

ನೀರದ ಕವಿದಿರೆ ಚಂದ್ರಂ । ಬೀರನೆ ತಂಪನ್ನು ಧರೆಗೆ
ಮಹಿಮಾತ್ಮರುಗಳ್ ॥ ದೂರಿರಿಸಿ ತಮ್ಮ ಕಷ್ಟವ ।
ತೋರಿಪರ್ಕೈ ದಯವ ಜನಕೆ ಸುಗುಣಾಭರಣಾ ॥ ೨೧ ॥

ಪನಿ-ಪನಿ ಕೂಡಲ್ ಪಳ್ಳಂ । ತೆನೆ-ತೆನೆಯೊಂದಾಗೆ ರಾಶಿ
ಯಪ್ಪುದು ಕೇಳ್ಕೈ ॥ ದಿನ-ದಿನ ಕಲಿಯಲ್ ವಿದ್ಯಾ- ।
ಧನದಿಂ ತುಂಬುವದು ಮನವು ಸುಗುಣಾಭರಣಾ ॥೨೨॥

ಸಲಿಗೆಯನಿತ್ತೊಡೆ ನಾಯಿ ನೊ- । ಸಲನುಂ ನೆಕ್ಕುವದದೆಂದು
ನುಡಿವರ್ ಜಗದೊಳ್ ॥ ಲಲನೆಯ ನಿತ್ಯಂ ಪೆಗಲಿನ ।
ಬಳಿಯೊಳಗಿಟ್ಟಿರಲು ಬೇಡ ಸುಗುಣಾಭರಣಾ ॥ ೨೩ ॥

ತನ್ನೊಳ್ ಬೆರೆದಿಹ ಜಲಮದು । ಖಿನ್ನತೆಯಿಂ ಪೋಗೆ ಪಾಲು
ಬೀಳ್ವುದದುರಿಯೊಳ್ ॥ ನಿನ್ನಯ ಕೆಳೆಯನ ದುಃಖಂ ।
ತನ್ನದದೆಂಬರ್ಥಿವನರಿಯೊ ಸುಗುಣಾಭರಣಾ ॥ ೨೪ ॥

ತರಣಿಯ ಕಿರಣಗಳಿಂದಂ । ಕರಗದ ಚಂದ್ರೋಪಲವು
ಪೆರೆಯ ಕಿರಣಗಳಿಂದಂ ॥ ಕರಗದೆ ಸವಿನುಡಿಯಂದದೆ ।
ಬಿರುನುಡಿಯಿಂ ಕಾರ್ಯವಹುದೆ ಸುಗುಣಾಭರಣಾ ॥೨೫॥

ಮಲ್ಲಿಗೆಯ ಮಾಲೆಯೊಳಗಿಹ । ವಲ್ಲಿಯು ತಾನುಚ್ಚಪದವ
ಸೇರದೆ ಮನುಜಾ ॥ ಒಳ್ಳಿದರ ಸಂಗ ಪಿಡಿದವ ।
ನೊಳ್ಳಿದನವನಪ್ಪುದರಿದೆ ಸುಗುಣಾಭರಣಾ ॥ ೨೬ ॥

ಕ್ಷೀರಂ ತನ್ನಂ ಬೆರೆದಿಹ । ನೀರಿಗೆ ತನ್ನಂತೆ ರುಚಿಯ
ನೀವುದು ನಿತ್ಯಂ ॥ ಸೇರಲ್ ಸಜ್ಜನ ಸಂಗವ ।
ಸಾರ ಸುಖಾನಂದವಹುದು ಸುಗುಣಾಭರಣಾ ॥ ೨೭ ॥

ಅರಳಲು ಕಮಲಂ ಭ್ರಮರಂ । ಭರದಿಂದೈತಂದು ಮಧು-
ವ ನೀಂಟದೆ ಪೇಳ್ಳೈ ॥ ವರವಿದ್ಯಾಮೃತದಿಂ ತುಂ- ।
ಬಿರೆ ನಿನ್ನಂ ಮನ್ನಿಸುವರು ಸುಗುಣಾಭರಣಾ ॥ ೨೮ ॥

ಜಲವನ್ನಿತ್ತಿಹ ಜಲಧಿಗೆ । ಜಲನುಂ ತಾನೀಯದೇನು
ಬೇಡದೆ ಮೇಘಂ ॥ ಇಳೆಯೊಳ್ ಬೇಡದೆ ಕೊಡುವಗೆ ।
ನಲಿದಿತ್ತಪರೆಂಬುದರಿಯೊ ಸುಗುಣಾಭರಣಾ ॥ ೨೯ ॥

ಸರಸಿಗಳ ಗಣಿತವಿರಲೇಂ । ಅರಸಂಚೆಯು ಬಯಸುತಿಹು-
ದು ಮಾನಸಸರಮಂ ॥ ಧರೆಯೊಳ್ ಧನಿಕರ್ ತುಂಬಿರೆ ।
ಸಿರಿಯಂ ಪಡೆ ಯೋಗ್ಯರಲ್ಲಿ ಸುಗುಣಾಭರಣಾ ॥ ೩೦ ॥

ಹರನಂ ಸೇರಿದ ಭುಜಗಂ । ಗರುಡನ ಭಯವನ್ನು ತಾನು
ಲೆಕ್ಕಿಪುದೇನೈ ॥ ನಿರುತಂ ಘನಪುರುಷರುಗಳ ।
ಮರೆಯಂ ನೀಂ ಸೇರಿ ಬಾಳು ಸುಗುಣಾಭರಣಾ ॥೩೧॥

ಕಾಗೆಯ ಗುಂಪಿನೊಳಿರುತಿಹ । ಕೋಗಿಲೆ ತಾಂ ರಾಗ
ಪಾಡದಿರಲೆಂತರಿಗುಂ ॥ ಸಾಗದು ಮೂಢರ ಸಭೆಯೊಳ್ ।
ಮೂಗನ ತೆರವಿರಲು ವಿಬುಧ ಸುಗುಣಾಭರಣಾ ॥ ೩೨ ॥

## ನಾನೊಬ್ಬನು.

॥ ವಾರ್ಧಿಕ ಷಟ್ಪದಿ. ॥

(೧) ಶರಧಿಯೊಳಗಿರಲುಶಗ-ವ್ಯಾಘ್ರ-ಸಿಂಹಗಳಲ್ಲ ।
ಹರಿಯೆಂಬ ಪೆಸರಿರಲು ಸಿರಿಯರಸ ನಾನಲ್ಲ ।
ಧರೆಯಿಂದ ಜನ್ಮಿಸಿದ ಮಂಗನಲ್ಲವು ಬಾಲಧರನಿರಲು ಗಿರಿಶನಲ್ಲ ॥
ಕರಗಳೆರಡಿರೆ ಮೆರೆವ ನರನಲ್ಲ ಧರೆಯೆಲ್ಲಿ ।
ಚರಿಸುತಿರೆ ಪದಚತುಷ್ಟಯಗಳಿಂ ನರನಲ್ಲ ।
ತರುವಿನಿಂ ತರುವಿಂಗೆ ಹಾರಾಡುತಿರೆ ವಿಹಂಗಮನಲ್ಲ ದನುಜನಲ್ಲ ॥

## ನಾರೀಮಣಿಯೋ! ಯೋಗಿಯೋ!

॥ ವಾರ್ಧಿಕ ಷಟ್ಪದಿ ॥

(೧) ಕೇಶಂಗಳಿರೆ ನಿಯಮದಿಂ ಶ್ರುತಿಯ ಪಾರಮಂ ।
ತೋಷದಿಂ ನೋಡುತಿರೆ ನೇತ್ರಗಳ್, ದ್ವಿಜಗಣಾ ।
ವಾಸಮಾಗಿರೆ ಮುಖಂ, ಕುಂಭಕುಚಯುಗಲಮುಕ್ತಾನಂದದಲ್ಲಿದಿರೆ ॥
ಲೇಸಾಗಿ ನೋಡಲ್ ಕೃಶಾಂಗಿಯೆಂದೆನಿಸಿರಲ್ ।
ಕ್ಲೇಶಮಂ ಸಂಹರಿಸಿ ರಾಗಮಂ ಬೀರುತಿಹು । ದೈ
ಸದಾ ನಿನ್ನ ಪ್ರಶಾಂತಮಾದಂಗವಿದು ಜಗಕೆಲ್ಲ ನೀನೆ ಮುದ್ದು ॥

---

## ಸೀತೆಯ ಸೊಲ್ಲು.

॥ ವಾರ್ಧಿಕ ಷಟ್ಪದಿ. ॥

(೧) ಜನಕನಂದನೆ ಜನಪಕಂದನಾನಂದಿನೀ ।
ಧನಲಕ್ಷ್ಮಿಯೆನ್ನ ಕರಕಮಲದೊಳ್ ನೆಲೆಸಿರಲು । ಮಿನು-
ಗುತಿರೆ ಕನಕ-ಮೌಕ್ತಿಕ-ರತ್ನಗಳ ವಸ್ತ್ರಗಳು ಮದಂಗಾಂಗಗಳೊಳು ॥
ದಿನದಿನಕೆ ನೂರಾರು ದಾಸಿಯರು ಸೇವಿಪಗು ।
ಘನಸಾರ ತಲ್ಪದೊಳ್ ಮಲಗುವೆಂ ವಿಧಿಯಿಂದ ।
ವನವಾಸವಾಯ್ತೆನ್ನ ನಲ್ಲಂಗೆ ಪದಿನಾಲ್ಕು ವರುಷಗಳು ಕೇಳಿರವ್ವಾ ॥

(೨) ದೇಶಕೋಶಂಗಳಂ ಬಂಧು ಬಳಗಂಗಳಂ ।
ಭೂಷಣಾಂಬರಗಳಂ ಸಲೆ ಬಿಟ್ಟು ತವಕದಿಂ ।
ಕಾಷಯಾಂಬರಗಳಂ ಬಿಗಿದುಟ್ಟು ಕೇಶಂಗಳಂ ಕಟ್ಟಿ ಬಿಲ್ಲ ತೊಟ್ಟು ॥

ಕ್ಲೇಶದಿಂ ಪೊರಮಟ್ಟ ರಾಮಾಭಿರಾಮನಂ ।
ದಾಸಿಯಾಂ ಕಂಡು ಕಂಗೆಟ್ಟು ಪೊಡಮಟ್ಟು ಕರ- ।
ಪಾಶದಿಂ ಬಿಗಿದಪ್ಪುತನುಮತಿಯ ಪೊಂದಿ ಕಾನನಕೆ ನಡೆತಂದೆನವ್ವಾ ॥

(೩) ಕಲ್ಲು-ಮುಳ್ಳಗಳ ಮೇಲೆ ಕಾಲಿಡುತ ದಳಭವನ- ।
ದಲ್ಲಿ ನೆಲಿಸುತ ಹಣ್ಣು-ಹಂಪಲಂಗಳ ಮೆಲ್ಲು ।
ಖುಲ್ಲಮೃಗಗಳ ಬೊಬ್ಬೆಯಬ್ಬರಣೆಯಂ ಕೇಳುತೆಲ್ಲಿಡೆಯೊಳುಂ ಸಂತತ ॥
ನಲ್ಲನಂ ಸೇವಿಸುತ ಕಾಡು-ನಾಡೆಂದು ಮನ- ।
ದಲ್ಲಿ ಭಾವಿಸುತಲಿರುತಿರಲಾಗಿ ಕದ್ದೊಯ್ದ ।
ಖುಲ್ಲರಕ್ಕಸನೆನ್ನ ನಿಜಪುರಕೆ ಕಣ್ದೆರೆದು ನೋಡಲಿಲ್ಲಾತನನ್ನು ॥

(೪) ಕನಸಿನಲಿ ಮನಸಿನಲಿ ರಾಮಮೂರ್ತಿಯ ನಿಲಿಸಿ ।
ನೆನೆನೆನೆದು ದುಗುಡದಿಂ ಕಾಲಮಂ ಕಳೆಯುತಿರೆ । ಇನಕು-
ಲೇಶನು ರಕ್ಕಸನ ತರಿದು ತರಲಯೋಧ್ಯಾಪುರಕೆ ತೋಷಮಾಯ್ತು ॥
ಇನಿಯನೊಡಗೂಡಿರಲ್ ಗರ್ಭವತಿಯಿರೆ ಮತ್ತೆ ।
ಜನತಾಪವಾದದಿಂ ತೊರೆದನೈ ಶ್ರೀರಾಮ । ವನ-
ವಾಸಮಾಯ್ತೆನಗೆ ವಿಧಿಯ ಬರಹವನಾರು ಮೀರುವರು? ಪೇಳಿರವ್ವಾ ॥

(೫) ಘೋರವನವಾದೊಡೇಂ ಕ್ರೂರ ಮೃಗವಾಸಮೇಂ ।
ಶ್ರೀರಾಮ ತೊರೆಯಲೇಂ ರಾಮನಂ ನೆನೆಯುತಿರೆ ।
ತೋರಿತ್ತೈ ವಾಲ್ಮೀಕಿಯಾಶ್ರಮವು ಪುತ್ರರಂ ಪೆತ್ತೆನಲ್ಲೀರ್ವರನ್ನು ॥
ಪೌರಜನವೊಪ್ಪಿರಲ್ ಮುನಿಯಿವಳ್ ಶುದ್ಧೆಯೆನೆ ।
ಭೂರಿಸಂತಸದಿಂದೆ ಕರೆತಂದನೈ ಪುರಕೆ । ಸೇರಿದೆನು
ಗುಣಧಾ... ...ತ್ತು ಕೇಳಿರವ್ವಾ ॥